# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ
(ಒಂಬತ್ತನೇ ಅಧಿವೇಶನ)

## ಕಾರ್ಯಕಲಾಪಗಳ ಪಟ್ಟಿ

ಬುಧವಾರ, ದಿನಾಂಕ 02ನೇ ಮಾರ್ಚ್, 2016
(ಸಮಯ: ಬೆಳಗ್ಗೆ 11.00 ಗಂಟೆಗೆ)

### 1. ರಾಜ್ಯಪಾಲರ ಭಾಷಣಕ್ಕೆ ಸಂಬಂಧಿಸಿದ ವಂದನಾರ್ಪಣಾ ಪ್ರಸ್ತಾವ

"2016ರ ಫೆಬ್ರವರಿ 29ರಂದು ವಿಧಾನಮಂಡಲದ ಉಭಯ ಸದನಗಳ ಸದಸ್ಯರುಗಳನ್ನುದ್ದೇಶಿಸಿ ದಯಪಾಲಿಸಿದ ಭಾಷಣಕ್ಕಾಗಿ ಈ ಅಧಿವೇಶನದಲ್ಲಿ ಸೇರಿರುವ ವಿಧಾನಸಭೆಯ ಸದಸ್ಯರಾದ ನಾವು ಮಾನ್ಯ ರಾಜ್ಯಪಾಲರಿಗೆ ಕೃತಜ್ಞತಾಪೂರ್ವಕವಾದ ವಂದನೆಗಳನ್ನು ಸಮರ್ಪಿಸಲು ಅಪ್ಪಣೆ ಕೋರುತ್ತೇವೆ"

ಎಂದು ಶ್ರೀ ಕೆ.ಆರ್.ರಮೇಶ್‌ಕುಮಾರ್ ಅವರು ಸೂಚಿಸುವುದು.

ಶ್ರೀ ಕೆ.ಶಿವಮೂರ್ತಿ ಅವರು ಅನುಮೋದಿಸುವುದು.

### 2. ಪ್ರಶ್ನೋತ್ತರ

ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಎರಡನೇ ಪಟ್ಟಿ
ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಎರಡನೇ ಪಟ್ಟಿ

### 3. ಸಭೆಯ ಮುಂದಿಡಲಾಗುವ ಕಾಗದ ಪತ್ರಗಳು

**ಅ) ಶ್ರೀ ಸಿದ್ದರಾಮಯ್ಯ (ಮುಖ್ಯಮಂತ್ರಿಗಳು) ಅವರು:-**

ಭಾರತ ಸಂವಿಧಾನದ 151 (2)ನೇ ಅನುಚ್ಛೇದದ ಮೇರೆಗೆ 2014-15ನೇ ಸಾಲಿನ ಧನ ವಿನಿಯೋಗ ಲೆಕ್ಕಗಳು ಮತ್ತು ಹಣಕಾಸು ಲೆಕ್ಕಗಳನ್ನು (ಭಾಗ-1 ಮತ್ತು ಭಾಗ-2) ಸಭೆಯ ಮುಂದಿಡುವುದು.

**ಆ) ಸದಸ್ಯರಿಗೆ ಈಗಾಗಲೇ ಪ್ರತ್ಯೇಕವಾಗಿ ಕಳುಹಿಸಲಾಗಿರುವ ಮೊದಲನೇ ಹಾಗೂ ಎರಡನೇ ಪಟ್ಟಿಯ ರೀತ್ಯ .**

### 4. ಶಾಸನ ರಚನೆ

#### I. ವಿಧೇಯಕವನ್ನು ಮಂಡಿಸುವುದು

**ಕರ್ನಾಟಕ ವಿಧಾನಮಂಡಲದವರ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ಎರಡನೇ ತಿದ್ದುಪಡಿ) ವಿಧೇಯಕ, 2015.**

**ಶ್ರೀ ಟಿ.ಬಿ.ಜಯಚಂದ್ರ (ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಉನ್ನತ ಶಿಕ್ಷಣ ಸಚಿವರು) ಅವರು:-**

ಅ) 2015ನೇ ಸಾಲಿನ ಕರ್ನಾಟಕ ವಿಧಾನಮಂಡಲದವರ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ಎರಡನೇ ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು:
ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

## II. ವಿಧೇಯಕವನ್ನು ಪರ್ಯಾಲೋಚಿಸುವುದು ಹಾಗೂ ಅಂಗೀಕರಿಸುವುದು

**ಕರ್ನಾಟಕ ವಿಧಾನಮಂಡಲದವರ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ಎರಡನೇ ತಿದ್ದುಪಡಿ) ವಿಧೇಯಕ, 2015.**
**ಶ್ರೀ ಟಿ.ಬಿ. ಜಯಚಂದ್ರ (ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಉನ್ನತ ಶಿಕ್ಷಣ ಸಚಿವರು) ಅವರು:-**

ಅ) ಕರ್ನಾಟಕ ವಿಧಾನಮಂಡಲದವರ ಸಂಬಳಗಳು, ನಿವೃತ್ತಿ ವೇತನಗಳು ಮತ್ತು ಭತ್ಯೆಗಳ (ಎರಡನೇ ತಿದ್ದುಪಡಿ) ವಿಧೇಯಕವನ್ನು ಪರ್ಯಾಲೋಚಿಸಬೇಕೆಂದು ಸೂಚಿಸುವುದು;
ಆ) ಹಾಗೂ ವಿಧೇಯಕವನ್ನು ಅಂಗೀಕರಿಸಬೇಕೆಂದು ಸೂಚಿಸುವುದು.

## 5. ಗಮನ ಸೆಳೆಯುವ ಸೂಚನೆಗಳು

1. **ಶ್ರೀ ಮಾಲೀಕಯ್ಯ ವೆಂಕಯ್ಯ ಗುತ್ತೇದಾರ** ರವರು - ಬರಗಾಲ ಪೀಡಿತ ಪ್ರದೇಶವಾಗಿ ಘೋಷಣೆಗೊಂಡಿರುವ ಕಲಬುರುಗಿ ಜಿಲ್ಲೆಯ ಅಫಜಲಪುರ ಕ್ಷೇತ್ರದ ರೈತರು ಮತ್ತು ಸಾರ್ವಜನಿಕರಿಗೆ ಕೂಡಲೆ ಕುಡಿಯುವ ನೀರಿನ ಸೌಲಭ್ಯ, ಬರಗಾಲದ ಪರಿಹಾರ ಹಾಗೂ ಬೆಳೆವಿಮೆ ಪರಿಹಾರ ನೀಡುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

2. **ಶ್ರೀ ಸಿದ್ದು ಬೀ ನ್ಯಾಮಗೌಡ** ರವರು - ಕುಡಿಯುವ ನೀರಿನ ಭೀಕರ ಸಮಸ್ಯೆಯಿಂದ ಬಳಲುತ್ತಿರುವ ಕೃಷ್ಣಾನದಿ ದಂಡೆಯ ನೂರಾರು ಹಳ್ಳಿಗಳ ಜನರು ಮತ್ತು ಜಾನುವಾರುಗಳಿಗೆ ಆಗುತ್ತಿರುವ ಸಮಸ್ಯೆಯನ್ನು ನೀಗಿಸುವ ಸಲುವಾಗಿ ವಾರಣಾ/ಕೊಯ್ನಾ ಡ್ಯಾಂ ನಿಂದ ನೀರನ್ನು ಬಿಡಿಸಲು ಮಹಾರಾಷ್ಟ್ರ ಸರ್ಕಾರದೊಂದಿಗೆ ಮಾತುಕತೆ ನಡೆಸಿ ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಜಲಸಂಪನ್ಮೂಲ ಸಚಿವರ ಗಮನ ಸೆಳೆಯುವುದು.

3. **ಶ್ರೀ ಎಂ.ಕೃಷ್ಣಾರೆಡ್ಡಿ** ರವರು - ಚಿಕ್ಕಬಳ್ಳಾಪುರ ಜಿಲ್ಲೆಯ ಕನಂಪಲ್ಲಿ ಗ್ರಾಮದ ಸರ್ವೆ ನಂ. 11ರ 1-25 ಗುಂಟೆ ಸರ್ಕಾರಿ ಹುಲ್ಲು ಬನ್ನಿ ಖರಾಬು ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲು ಕೈಗೊಂಡ ಕ್ರಮಗಳ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

4. **ಶ್ರೀ ಜಿ.ಹೆಚ್.ಶ್ರೀನಿವಾಸ್** ರವರು - ತರೀಕೆರೆಯಲ್ಲಿರುವ ಕಾರಾಗೃಹ ಇಲಾಖೆಯ ಸಿಬ್ಬಂದಿಗಳ ವಸತಿ ಗೃಹಗಳು ಶಿಥಿಲವಾಗಿದ್ದು, ಅವುಗಳನ್ನು ದುರಸ್ಥಿಗೊಳಿಸುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

5. **ಶ್ರೀಮತಿ ಜೊಲ್ಲೆ ಶಶಿಕಲಾ ಅಣ್ಣಾಸಾಹೇಬ** ರವರು - ನಿಪ್ಪಾಣಿ ಮತಕ್ಷೇತ್ರದ ಮಾಂಗೂರ ಮತ್ತು ಕಾರದಗಾ ಗ್ರಾಮಗಳಲ್ಲಿ ಇತ್ತೀಚೆಗೆ ಶಾರ್ಟಸರ್ಕ್ಯೂಟ್‌ನಿಂದ ಉಂಟಾದ ಬೆಂಕಿ ಆಕಸ್ಮಿಕದಲ್ಲಿ ಅಪರೂಪದ ಜಾನುವಾರುಗಳು ಬಲಿಯಾಗಿರುವುದರಿಂದ ನಷ್ಟಕ್ಕೊಳಗಾಗಿರುವ ರೈತ ಕುಟುಂಬಗಳಿಗೆ ಅಗತ್ಯ ಪರಿಹಾರವನ್ನು ನೀಡುವ ಬಗ್ಗೆ ಮಾನ್ಯ ಪಶುಸಂಗೋಪನೆ ಮತ್ತು ರೇಷ್ಮೆ ರಾಜ್ಯ ಸಚಿವರ ಗಮನಸೆಳೆಯುವುದು.

6. **ಶ್ರೀ ಹೆಚ್.ಡಿ.ರೇವಣ್ಣ** ರವರು - ಹಾಸನ, ಚನ್ನರಾಯಪಟ್ಟಣ ಮತ್ತು ಹೊಳೆನರಸೀಪುರ ತಾಲ್ಲೂಕುಗಳ ಗ್ರಾಮಗಳಿಗೆ ಕುಡಿಯುವ ನೀರಿನ ಯೋಜನೆಗಳಿಗೆ **"ಬಹುಗ್ರಾಮ ಯೋಜನೆ"** ಅಡಿಯಲ್ಲಿ ಕಾಮಗಾರಿಗಳ ಪ್ರಾಥಮಿಕ ಸರ್ವೆ ಕಾಮಗಾರಿ ಮುಗಿದಿದ್ದು, ಕಾವೇರಿ ನೀರಾವರಿ ನಿಗಮದ ವತಿಯಿಂದ ಸದರಿ ಯೋಜನೆಗೆ ಅನುಮೋದನೆ ದೊರೆತಿದ್ದರೂ **SLSSC** ಸಮಿತಿಗೆ ಪ್ರಸ್ತಾವನೆಯು ಮಂಡನೆಯಾಗದಿರುವ ಬಗ್ಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಗಮನ ಸೆಳೆಯುವುದು.

7. **ಶ್ರೀ ಕೆ.ಆರ್.ರಮೇಶ್ ಕುಮಾರ್** ರವರು – ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಇತ್ತೀಚಿನ ಆದೇಶದಂತೆ ತುಮಕೂರು ನಗರದಲ್ಲಿರುವ ಶ್ರೀದೇವಿ ವೈದ್ಯಕೀಯ ಕಾಲೇಜಿನಲ್ಲಿ ಪ್ರವೇಶಾತಿ ಪಡೆದಿರುವ ವಿದ್ಯಾರ್ಥಿಗಳನ್ನು ಕಾಲೇಜಿನಿಂದ ಹೊರ ಹಾಕಿರುವ ಬಗ್ಗೆ ಮಾನ್ಯ ವೈದ್ಯಕೀಯ ಶಿಕ್ಷಣ ರಾಜ್ಯ ಸಚಿವರ ಗಮನ ಸೆಳೆಯುವುದು.

8. **ಶ್ರೀ ಸಿ.ಎನ್.ಬಾಲಕೃಷ್ಣ** ರವರು – ಕೊಬ್ಬರಿ ಮಾರಾಟದಲ್ಲಿ ಮಧ್ಯವರ್ತಿಗಳು ಹಾಗೂ ಅಧಿಕಾರಿಗಳ ಶಾಮೀಲಿನಿಂದಾಗಿ ಕಡಿಮೆ ಬೆಲೆಗೆ ನಿಗದಿಗೊಳ್ಳುವ ಕೊಬ್ಬರಿಯ ಬೆಲೆಯಿಂದ ಈಗಾಗಲೇ ಅನಾವೃಷ್ಟಿಯಿಂದ ಆರ್ಥಿಕ ನಷ್ಟವನ್ನು ಅನುಭವಿಸುತ್ತಿರುವ ತೆಂಗು ಬೆಳೆಗಾರರ ಸಂಕಷ್ಟದ ಬಗ್ಗೆ ಮಾನ್ಯ ಕೃಷಿ ಮಾರುಕಟ್ಟೆ ಮತ್ತು ತೋಟಗಾರಿಕೆ ಸಚಿವರ ಗಮನ ಸೆಳೆಯುವುದು.

9. **ಶ್ರೀ ಕೆ.ಎಂ.ಶಿವಲಿಂಗೇಗೌಡ, ಶ್ರೀ ಹೆಚ್.ಡಿ.ರೇವಣ್ಣ ಮತ್ತು ಶ್ರೀ ಹೆಚ್.ಎಸ್.ಪ್ರಕಾಶ್** ರವರು – ರಾಜ್ಯದಲ್ಲಿರುವ ಹಾಲು ಒಕ್ಕೂಟಗಳು ಹಾಗೂ ರೈತರಿಗೆ ಆಗುತ್ತಿರುವ ನಷ್ಟವನ್ನು ಜಿಲ್ಲಾ ಒಕ್ಕೂಟಗಳ ಸಭೆ ಕರೆದು ನಷ್ಟ ಭರಿಸಲಾಗುವುದೆಂದು ನೀಡಿರುವ ಆಶ್ವಾಸನೆ ಬಗ್ಗೆ ಮಾನ್ಯ ಮುಖ್ಯ ಮಂತ್ರಿಗಳ ಗಮನ ಸೆಳೆಯುವುದು.

**ಎಸ್.ಮೂರ್ತಿ**
**ಕಾರ್ಯದರ್ಶಿ (I/C)**

---

**ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.**
http://kla.kar.nic.in/assembly/lob/lob.htm